## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1611
ಸದಸ್ಯರ ಹೆಸರು : ಡಾ|| ಚಂದ್ರಶೇಖರ್ ಬಿ.ಪಾಟೀಲ್
ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು
ಉತ್ತರಿಸುವ ದಿನಾಂಕ : 11.03.2022

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕಳೆದ ಎರಡು ವರ್ಷಗಳಿಂದ ಸಾರಿಗೆ ಸಂಸ್ಥೆಯ ಸಿಬ್ಬಂದಿಗಳಿಗೆ ಸಮವಸ್ತ್ರ ವಿತರಣೆ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ. | ಬಂದಿದ್ದಲ್ಲಿ, ಸಿಬ್ಬಂದಿಗಳಿಗೆ ಯಾವಾಗ ಸಮವಸ್ತ್ರ ವಿತರಣೆಗೆ ಕ್ರಮ ಕೈಗೊಳ್ಳಲಾಗುವುದು; | ರಾಜ್ಯದ ನಾಲ್ಕೂ ಸಾರಿಗೆ ಸಂಸ್ಥೆಗಳಲ್ಲಿ ಕಳೆದ ಎರಡು ವರ್ಷಗಳಿಂದ ವಿತರಿಸಲಾದ ಸಮವಸ್ತ್ರಗಳ ವಿವರ ಈ ಕೆಳಕಂಡಂತಿದೆ:<br>1. ಈ ಹಿಂದೆ ಸಮವಸ್ತ್ರಗಳ ಖರೀದಿಗೆ ಕರೆಯಲಾದ ಎರಡು ಟೆಂಡರ್‌ಗಳನ್ನು ತಾಂತ್ರಿಕ ಕಾರಣಗಳಿಂದ ರದ್ದುಗಳಿಸಲಾಗಿತ್ತು. ಆದ್ದರಿಂದ 2017-18ನೇ ಸಾಲಿನಲ್ಲಿ ವಿತರಿಸಬೇಕಾದ ಸಮವಸ್ತ್ರಗಳನ್ನು ಟೆಂಡರ್ ಮುಖಾಂತರ ಆಗಸ್ಟ್-2020 ರಿಂದ ಮಾರ್ಚ್-2021ರವರೆಗೆ ಖರೀದಿಸಿ ಸಿಬ್ಬಂದಿಗಳಿಗೆ ವಿತರಿಸಲಾಗಿದೆ. (ಕೋವಿಡ್-19ರ ಕಾರಣದಿಂದಾಗಿ ಸರಬರಾಜು ವಿಳಂಬವಾಗಿರುತ್ತದೆ)<br>2. 2018-19ನೇ ಸಾಲಿಗೆ ಸಮವಸ್ತ್ರಗಳ ಬದಲು ನಗದು ಪಾವತಿಯನ್ನು ಮಾರ್ಚ್-2020ರಲ್ಲಿ ಪಾವತಿಸಲಾಗಿದೆ.<br>3. 2019-20 ಮತ್ತು 2020-21ನೇ ಸಾಲಿಗೆ ಸಮವಸ್ತ್ರದ ಬದಲು ನಗದು ಪಾವತಿ ಕುರಿತು ಕ್ರಮ ಕೈಗೊಳ್ಳಲಾಗಿದೆ.<br>4. 2021-22ನೇ ಸಾಲಿನ ಸಮವಸ್ತ್ರಗಳ ಖರೀದಿಗೆ ಮೆ|| ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ, ಬೆಂಗಳೂರು ರವರಿಗೆ ಖರೀದಿ ಆದೇಶ ನೀಡಲಾಗಿದೆ.<br>ಮೆ|| ಕರ್ನಾಟಕ ಕೈಮಗ್ಗ ಅಭಿವೃದ್ಧಿ |

| | | |
|---|---|---|
| | | ನಿಗಮ, ಬೆಂಗಳೂರು ರವರಿಂದ ಸರಬರಾಜು ಪಡೆದ ನಂತರ ಸಮವಸ್ತ್ರಗಳನ್ನು ಅರ್ಹ ಸಿಬ್ಬಂದಿಗಳಿಗೆ ವಿತರಿಸಲಾಗುವುದು. |
| ಇ. | ಸಿಬ್ಬಂದಿಗಳ ಸಮವಸ್ತ್ರ ವಿತರಣೆ ವಿಳಂಬಕ್ಕೆ ಸಂಬಂಧಪಟ್ಟವರ ಮೇಲೆ ಕೈಗಂಡ ಕ್ರಮವೇನು? | ಕೋವಿಡ್-19ರ ಹಿನ್ನಲೆಯಲ್ಲಿ ನಿಗಮದಲ್ಲಿ ಆರ್ಥಿಕ ಸಂಕಷ್ಟ ಉಂಟಾದ ಕಾರಣ ಸಮವಸ್ತ್ರ ಖರೀದಿಯಲ್ಲಿ ಸ್ವಲ್ಪ ಮಟ್ಟಿಗೆ ವಿಳಂಬವಾದರೂ ಅರ್ಹ ಸಿಬ್ಬಂದಿಗಳಿಗೆ ಸಮವಸ್ತ್ರ ವಿತರಿಸಲು ಮತ್ತು ಸಮವಸ್ತ್ರದ ಬದಲು ನಗದು ಪಾವತಿ ಕುರಿತು ಕ್ರಮ ಕೈಗೊಳ್ಳಲಾಗಿದೆ. ಆದ್ದರಿಂದ, ಸದರಿ ಸಮವಸ್ತ್ರ ವಿತರಣೆ ವಿಳಂಬಕ್ಕೆ ಸಂಬಂಧಪಟ್ಟವರ ಮೇಲೆ ಯಾವುದೇ ಕ್ರಮವನ್ನು ಕೈಗೊಂಡಿರುವುದಿಲ್ಲ. |

ಸಂಖ್ಯೆ: ಟಿಡಿ 79 ಟಿಸಿಕ್ಯೂ 2022

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು